# ಗುಣಮಟ್ಟದ ಶಿಕ್ಷಣ: ದೆಹಲಿ ಸರ್ಕಾರದ ಉಪಕ್ರಮ

**ಮೊಹಮದ್ ಸುಹೇಲ್ ಮತ್ತು ವಾಸೀಮ್ ಅಹಮದ್ ಖಾನ್**



ಶಿಕ್ಷಣವು ಯಶಸ್ವಿ ಜೀವನದ ಅಡಿಪಾಯವಾಗಿದೆ: ಇದು ಕಲಿಕಾರ್ಥಿಗಳ ಸಮಗ್ರ ಅಭಿವೃದ್ಧಿಗೆ ಜ್ಞಾನ ಮತ್ತು ಕೌಶಲಗಳನ್ನು ನೀಡಿ ಸಬಲೀಕರಿಸುತ್ತದೆ. ಗುಣಮಟ್ಟದ ಶಿಕ್ಷಣವು ಮಾನವ, ಸಾಮಾಜಿಕ, ರಾಷ್ಟ್ರೀಯ ಮತ್ತು ಸಾರ್ವತ್ರಿಕ ಗುರಿಗಳೊಂದಿಗೆ ವ್ಯವಹರಿಸಲು ಓರ್ವ ವ್ಯಕ್ತಿಗೆ ಸಹಾಯ ಮಾಡುವ ಜ್ಞಾನ, ಕೌಶಲಗಳು, ವರ್ತನೆಗಳು ಮತ್ತು ಮೌಲ್ಯಗಳನ್ನು ಉತ್ತಮವಾಗಿ ಅರ್ಜಿಸಿಕೊಳ್ಳಲು ಒತ್ತು ನೀಡಬೇಕು.

ಶಾಲೆಗಳಲ್ಲಿ ಬೆಳೆಸಿಕೊಳ್ಳಲಾಗುವ ಜ್ಞಾನಾತ್ಮಕ ಮತ್ತು ಜ್ಞಾನಾತ್ಮಕವಲ್ಲದ ಕೌಶಲಗಳು ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಕೊಡುಗೆ ನೀಡುತ್ತವೆ. ಇದು ಕಲಿಕಾರ್ಥಿಗಳನ್ನು ಸಾಮಾಜಿಕವಾಗಿ ಹೆಚ್ಚು ಸ್ವೀಕಾರಾರ್ಹ ವ್ಯಕ್ತಿಗಳಾಗುವಂತೆ ಸಹಾಯ ಮಾಡುತ್ತದೆ ಮತ್ತು ಶಾಂತಿಯುತ, ಆನಂದದಾಯಕ ಮತ್ತು ನ್ಯಾಯಸಮ್ಮತ ಸಮಾಜಗಳನ್ನು ರಚಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ದೇಶದ ಸಂಪನ್ಮೂಲವಾಗಿ ಕೌಶಲಪೂರ್ಣ ಮಾನವರನ್ನು ರೂಪಿಸಲು ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣ ನೀಡುವುದು ಮುಖ್ಯವಾಗುತ್ತದೆ. ಪ್ರಸ್ತುತ, ಮಕ್ಕಳ ಯಶಸ್ಸು ಅವರು ಪಡೆಯುವ ಗುಣಮಟ್ಟದ ಶಿಕ್ಷಣದೊಂದಿಗೆ ಸಂಪೂರ್ಣವಾಗಿ ಸಂಬಂಧ ಹೊಂದಿದ್ದರೂ ಸಹ, ದೇಶದ ವಿವಿಧ ಭಾಗಗಳಲ್ಲಿನ ಮಕ್ಕಳು ಗುಣಮಟ್ಟದ ಮಾನದಂಡಗಳಿಗೆ ಸಂಬಂಧಿಸಿದಂತೆ ಅಸಮಾನ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಉನ್ನತ ಗುಣಮಟ್ಟದ ಶಿಕ್ಷಣ ಹೊಂದಿರುವ ವ್ಯಕ್ತಿಯು ಹೊಸ ಹೊಸ ವಿಧಾನಗಳನ್ನು ಆವಿಷ್ಕಾರ ಮಾಡುವಲ್ಲಿ ಸಮರ್ಥನಾಗುವುದರೊಂದಿಗೆ ಆರ್ಥಿಕ ಅಭಿವೃದ್ಧಿಯನ್ನೂ ಸಾಧಿಸುತ್ತಾನೆ ಎಂಬುದು ವಾಸ್ತವವಾಗಿದೆ.

## ದೆಹಲಿ ಸರ್ಕಾರಿ ಶಾಲೆಗಳಲ್ಲಿನ ಪ್ರಸ್ತುತ ಸನ್ನಿವೇಶ

ದೆಹಲಿಯು ಭಾರತದ ರಾಜಧಾನಿಯಾಗಿದೆ ಹಾಗೂ ಒಂದು ಮಹಾನಗರವೂ ಆಗಿದೆ. ಅಲ್ಲಿ ಗುಣಮಟ್ಟದ ಶಿಕ್ಷಣವ್ಯವಸ್ಥೆಯನ್ನು ನಿರೀಕ್ಷಿಸುವುದು ಸಹಜ. ದೆಹಲಿಯು ವಿವಿಧ ರೀತಿಯ ಶಾಲೆಗಳನ್ನು ಹೊಂದಿದೆ. ಖಾಸಗಿ, ಸರ್ಕಾರಿ-ಅನುದಾನಿತ, ದೆಹಲಿಯ ಮಹಾನಗರ ಪಾಲಿಕೆ (MCD) ನಡೆಸುವ ಮತ್ತು ಶಿಕ್ಷಣ ನಿರ್ದೇಶನಾಲಯ ನಡೆಸುವ ಶಾಲೆಗಳು ಇದಕ್ಕೆ ಉದಾಹರಣೆಗಳು. ಆದಾಗ್ಯೂ, ಕೆಲವು ವ್ಯಕ್ತಿಗಳು ಅಥವಾ ವ್ಯಕ್ತಿಗಳ ಗುಂಪಿನಿಂದ ನಡೆಸಲಾಗುವ ಹಲವಾರು ಮಾನ್ಯತೆ ಪಡೆಯದ ಶಾಲೆಗಳೂ ಇವುಗಳಲ್ಲಿ ಸೇರಿವೆ.

ದೆಹಲಿಯ ಶಾಲೆಗಳಲ್ಲಿ ನಲವತ್ತು ಲಕ್ಷಕ್ಕೂ ಹೆಚ್ಚು ವಿದ್ಯಾರ್ಥಿಗಳಿದ್ದಾರೆ. ಅವರಲ್ಲಿ ಬಹುತೇಕ ವಿದ್ಯಾರ್ಥಿಗಳು ದೆಹಲಿಯ ಮಹಾನಗರ ಪಾಲಿಕೆ ಮತ್ತು ದೆಹಲಿ ಸರ್ಕಾರ ನಡೆಸುವ ಶಾಲೆಗಳಲ್ಲಿ ಓದುತ್ತಿದ್ದಾರೆ. ದುರದೃಷ್ಟವಶಾತ್, ಇತ್ತೀಚಿನ ಅಧ್ಯಯನಗಳು ಮತ್ತು ಸಮೀಕ್ಷೆಗಳು ಮಕ್ಕಳಲ್ಲಿ ಕಲಿಕೆಯ ಗುಣಮಟ್ಟವು ತುಂಬಾ ಕಡಿಮೆ ಇರುವುದನ್ನು ತೋರಿಸುತ್ತಿವೆ: ದೆಹಲಿಯ 14 ರಿಂದ 18 ವರ್ಷದ ಹದಿವಯಸ್ಸಿನವರಿಗೆ ಸ್ಥಳೀಯ ಭಾಷೆ ಅಥವಾ ಮಾತೃಭಾಷೆಯನ್ನು ನಿರರ್ಗಳವಾಗಿ ಓದಲು ಬರುವುದಿಲ್ಲ ಮತ್ತು ಶೇಕಡಾ 50 ಕ್ಕಿಂತ ಹೆಚ್ಚು ಅಥವಾ ಅರ್ಧದಷ್ಟು ವಿದ್ಯಾರ್ಥಿಗಳು ಸರಳ ಭಾಗಾಕಾರವನ್ನು ಮಾಡಲಾರರು, ಇಂಗ್ಲಿಷ್‌ಅನ್ನುಓದಲಾರರು. ಇದೇ ರೀತಿಯ ಕಲಿಕಾ ಸ್ಥಿತಿಯು ಹಿರಿಯ ಪ್ರಾಥಮಿಕ ಹಂತದ ವಿದ್ಯಾರ್ಥಿಗಳಲ್ಲಿಯೂ ಕಂಡುಬಂದಿದೆ. ದೆಹಲಿ ಸರ್ಕಾರ ನಡೆಸಿದ ಸಮೀಕ್ಷೆಯ ಪ್ರಕಾರ ಆರನೇ ತರಗತಿಯಲ್ಲಿ ಕೇವಲ ಶೇಕಡ 25 ರಷ್ಟು ವಿದ್ಯಾರ್ಥಿಗಳು ಮಾತ್ರ ಹಿಂದಿ ಪಠ್ಯ ಪುಸ್ತಕಗಳನ್ನು ಮತ್ತು ಎರಡನೇ ತರಗತಿಯ ಇಂಗ್ಲಿಷ್ ಪಠ್ಯ ಪುಸ್ತಕಗಳನ್ನು ಓದಬಲ್ಲರು.

ಕಲಿಕಾ ಮಟ್ಟದ ಈ ಪರಿಸ್ಥಿತಿಯು, ಇತರ ಸ್ಥಳಗಳ, ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಲು ಕಷ್ಟಕರವಾದ ದೂರ ಪ್ರದೇಶಗಳ ಸ್ಥಿತಿ ಹೇಗಿರಬಹುದು ಎಂದು ನಮ್ಮನ್ನು ವಿದ್ಯಾರ್ಥಿಗಳ ಭವಿಷ್ಯದ ಯೋಚಿಸುವಂತೆ ಮಾಡುತ್ತ ಅನುಕೂಲಕ್ಕಾಗಿ ಗುಣಮಟ್ಟದ ಶಿಕ್ಷಣವನ್ನು ಪ್ರಸಾರ ಮಾಡುವುದು ಮುಖ್ಯವಾಗಿದೆ. ಶಿಕ್ಷಣದ ಗುಣಮಟ್ಟದ ಎಲ್ಲಾ ಅಂಶಗಳನ್ನು ಸುಧಾರಿಸುವುದನ್ನು ಮತ್ತು ಎಲ್ಲರೂ ಶ್ರೇಷ್ಠರಾಗಿ ಅಭಿವೃದ್ಧಿ ಹೊಂದುವುದನ್ನು ಖಾತ್ರಿಪಡಿಸುವಂತೆ UNESCO (2014) ಶಿಫಾರಸು ಮಾಡಿದೆ. ಇದರಿಂದಾಗಿ ವಿಶೇಷವಾಗಿ ಸಾಕ್ಷರತೆ, ಸಂಖ್ಯಾಜ್ಞಾನ ಮತ್ತು ಅಗತ್ಯ ಜೀವನ ಕೌಶಲಗಳಲ್ಲಿ ಗುರುತಿಸಬಲ್ಲ ಮತ್ತು ಮಾಪನ ಮಾಡಬಹುದಾದ ಕಲಿಕಾ ಫಲಿತಾಂಶಗಳನ್ನು ಎಲ್ಲರೂ ಸಾಧಿಸಬಹುದು ಎಂಬುದು ಅದರ ಆಶಯ.

## ವಿನೂತನ ಆಚರಣೆಗಳ ಅಗತ್ಯತೆ

2009 ರಲ್ಲಿ ಶಿಕ್ಷಣ ಹಕ್ಕು ಕಾಯ್ದೆ (ಆರ್ ಟಿ ಇ) ಯನ್ನು 6 ರಿಂದ 14 ವರ್ಷ ವಯಸ್ಸಿನ ಪ್ರತಿ ಮಗುವಿಗೂ ಶಿಕ್ಷಣವನ್ನು ಪಡೆಯಲು ಅವಕಾಶ ಒದಗಿಸುವ ಉದಾತ್ತ ಉದ್ದೇಶದೊಂದಿಗೆ ಜಾರಿಗೆ ತರಲಾಯಿತು. ಇದರ ವ್ಯಾಪ್ತಿಯನ್ನು 1 ರಿಂದ 8ನೇ ತರಗತಿಗಳವರೆಗೆ ಇಟ್ಟುಕೊಳ್ಳಲಾಯಿತು. ಈ ಹಕ್ಕು ಕೇವಲ ಶಿಕ್ಷಣ ಪಡೆಯುವುದು ಮಾತ್ರವಲ್ಲ, ಇದು ಪ್ರತಿಮಗುವಿಗೂ ಗುಣಮಟ್ಟದ ಶಿಕ್ಷಣವೇ ಸಿಗಬೇಕು ಎಂದೂ ವಿಧಿಸುತ್ತದೆ.

ವಿದ್ಯಾರ್ಥಿಗಳ ಪ್ರಸ್ತುತ ಕಲಿಕಾ ಮಟ್ಟದ ಸ್ಥಿತಿಯು ಕಲಿಕೆಯಲ್ಲಿರುವ ಅಡೆತಡೆಗಳನ್ನು ನಿವಾರಿಸಲು ಕೆಲವು ಹೊಸ ಮತ್ತು ನವೀನ ಬೋಧನಾ-ಕಲಿಕಾ ಪ್ರಕ್ರಿಯೆಗಳ ಅಳವಡಿಕೆಗೆ ಹೆಚ್ಚಿನ ಒತ್ತು ನೀಡುತ್ತದೆ. ಶಿಕ್ಷಣದ ಗುಣಮಟ್ಟದಲ್ಲಿ ತರುವ ನವೀನತೆಯು, ಪರಿಣಾಮಕಾರಿಯಾಗಿ ಸಂವಹನ ಮಾಡುವ, ವೈಚಾರಿಕವಾಗಿ, ತರ್ಕಬದ್ಧವಾಗಿ ಆಲೋಚಿಸುವ, ಜೊತೆಗೂಡಿ ಕೆಲಸ ಮಾಡುವ ಮತ್ತು ಅರ್ಹತೆಯ ಮೇಲೆ ನಿರ್ಧಾರಗಳನ್ನು ತೆಗೆದುಕೊಳ್ಳುವ ಒಂದು ತಲೆಮಾರನ್ನು ರೂಪಿಸುವುದೆಂದು ಅಪೇಕ್ಷಿಸಲಾಗಿದೆ. ಆದ್ದರಿಂದ, ಗುಣಮಟ್ಟದ ಶಿಕ್ಷಣವನ್ನು ನೀಡುವಲ್ಲಿ ಇರುವ ಅಡೆತಡೆಗಳನ್ನು ನಿವಾರಿಸಲು ನವೀನ ವಿಧಾನಗಳಿಗೆ ಒತ್ತು ನೀಡುವ

ಪಠ್ಯಕ್ರಮ/ ವ್ಯಾಸಂಗ ಕ್ರಮದ ವಿಮರ್ಶೆಯು ಈ ಸಮಯದ ಅಗತ್ಯವಾಗಿದೆ.

**ದೆಹಲಿ ಸರ್ಕಾರದ ಉಪಕ್ರಮಗಳು**

ಲುಕ್ ಬಿಯಾಂಡ್ ಬೇಸಿಕ್ಸ್ (ಬುನಾದಿಯಾಚೆಗೂ ನೋಟ) ಎಂಬ ವಾರ್ಷಿಕ ಶಿಕ್ಷಣ ಸ್ಥಿತಿಯ ವರದಿಯು (ASER 2017) 14-18 ವಯಸ್ಸಿನ 86 ಪ್ರತಿಶತ ಯುವಕರು, ಶಾಲೆಯಲ್ಲಿ ಅಥವಾ ಕಾಲೇಜಿನಲ್ಲಿದ್ದರೂ, ಇನ್ನೂ ಔಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲೇ ಇದ್ದಾರೆ ಮತ್ತು ಸುಮಾರು 25 ಪ್ರತಿಶತದ ಈ ವಯೋಮಾನದವರು ಇನ್ನೂ ತಮ್ಮ ಭಾಷೆಯಲ್ಲಿ ಮೂಲ ಪಠ್ಯಗಳನ್ನು ನಿರರ್ಗಳವಾಗಿ ಓದಲು ಸಾಧ್ಯವಾಗುತ್ತಿಲ್ಲ ಎಂದು ವರದಿಮಾಡಿದೆ. ಅವರಲ್ಲಿ ಕೇವಲ 43 ಪ್ರತಿಶತದಷ್ಟು ಜನರು ಮಾತ್ರ ಭಾಗಾಕಾರದ (ಒಂದಂಕಿಯಿಂದ ಮೂರು ಅಂಕೆಗಳ ಸಂಖ್ಯೆಯನ್ನು) ಸಮಸ್ಯೆಗಳನ್ನು ಸರಿಯಾಗಿ ಪರಿಹರಿಸಲು ಸಮರ್ಥರಾಗಿದ್ದಾರೆ.

ದೆಹಲಿಯಲ್ಲಿಯೂ ಸಹ ಹೆಚ್ಚು ಕಡಿಮೆ ಇಂತಹದ್ದೇ ಪರಿಸ್ಥಿತಿಯಿದೆ. ಆದರೆ ದೆಹಲಿ ಸರ್ಕಾರವು ಈ ಎಲ್ಲಾ ತೊಡಕುಗಳನ್ನು ಮುರಿದು, ಗುಣಮಟ್ಟದ ಶಿಕ್ಷಣವನ್ನು ಖಚಿತವಾಗಿ ಒದಗಿಸುವ ಮಾರ್ಗಗಳನ್ನು ಹುಡುಕಲು ನಿರ್ಧರಿಸಿತು. ಶಿಕ್ಷಕರು, ವಿದ್ಯಾರ್ಥಿಗಳು ಮತ್ತು ಬೋಧನಾ-ಕಲಿಕಾ ಪ್ರಕ್ರಿಯೆಯ ಗುಣಮಟ್ಟವನ್ನು ಹೆಚ್ಚಿಸಲು ಸರ್ಕಾರವು ಪ್ರಮುಖ ಕಾರ್ಯಕ್ರಮಗಳನ್ನು ಪ್ರಾರಂಭಿಸಿತು.

6 ರಿಂದ 8ನೇ ತರಗತಿ ವಿದ್ಯಾರ್ಥಿಗಳ ಕಲಿಕೆಯ ಕೊರತೆಗಳನ್ನು ಕಡಿಮೆ ಮಾಡುವ ಉದ್ದೇಶದಿಂದ ಮತ್ತು 9ನೇ ತರಗತಿಯಲ್ಲಿ ಯಾರೂ ಶಾಲೆಯನ್ನು ತೊರೆಯದಂತೆ ನೋಡಿಕೊಳ್ಳಲು ಜೂನ್ 2016ರಲ್ಲಿ 'ಚುನೌತಿ' ಎಂಬ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ವಿದ್ಯಾರ್ಥಿಗಳ ಕಲಿಕೆಯ ಮಟ್ಟಕ್ಕೆ ಅನುಗುಣವಾಗಿ 6 ರಿಂದ 8ನೇ ತರಗತಿಯ ವಿದ್ಯಾರ್ಥಿಗಳನ್ನು ಎರಡು ಗುಂಪುಗಳಾಗಿ (ಪ್ರತಿಭಾ ಮತ್ತು ನಿಷ್ಠಾ) ಮತ್ತು 9ನೇ ತರಗತಿಯ ವಿದ್ಯಾರ್ಥಿಗಳನ್ನು ಮೂರು ಗುಂಪುಗಳಾಗಿ (ಪ್ರತಿಭಾ, ನಿಷ್ಠಾ ಮತ್ತು ವಿಶ್ವಾಸ) ವಿಂಗಡಿಸಲಾಯಿತು. ಶಿಕ್ಷಕರು ಪಠ್ಯ ಪುಸ್ತಕ ಮತ್ತು ಉಪನ್ಯಾಸ ವಿಧಾನವನ್ನು ಅನುಸರಿಸುವ ಬದಲು ಸೂಕ್ತ ವಿಧಾನಗಳನ್ನು ಅಳವಡಿಸಿಕೊಳ್ಳುವಂತೆ ತಿಳಿಸಲಾಯಿತು. ಶಿಕ್ಷಕರಿಗಾಗಿ ವಿಶೇಷ ತರಬೇತಿ ಕಾರ್ಯಾಗಾರಗಳನ್ನು ಆಯೋಜಿಸಲಾಯಿತು ಮತ್ತು ಮೂಲಭೂತ ಕಲಿಕಾ ಕೌಶಲಗಳಾದ ಓದುವುದು, ಬರೆಯುವುದು ಮತ್ತು ಮೂಲಭೂತ ಗಣಿತದ ಸಾಮರ್ಥ್ಯಗಳನ್ನು ಬಲಪಡಿಸಲು ವಿಶೇಷವಾದ ವಿಷಯವನ್ನು ವಿನ್ಯಾಸಗೊಳಿಸಿ, ಅಭಿವೃದ್ಧಿಪಡಿಸಲಾಯಿತು.

ದೆಹಲಿ ಸರ್ಕಾರದ ಮತ್ತೊಂದು ಉಪಕ್ರಮವೆಂದರೆ ಮಾರ್ಗದರ್ಶಕ ಶಿಕ್ಷಕರ ನೇಮಕಾತಿ. ಶಾಲೆಗಳಲ್ಲಿ ಶಿಕ್ಷಕರಿಗೆ ಸ್ಥಳದಲ್ಲಿಯೇ (ಆನ್ ಸೈಟ್) ಬೋಧನಾ ವಿಧಾನ ಮತ್ತು ಶೈಕ್ಷಣಿಕ ಬೆಂಬಲವನ್ನು ಒದಗಿಸಲು ಶಿಕ್ಷಣ ನಿರ್ದೇಶನಾಲಯದ (DoE) ಶಾಲೆಗಳಿಂದ ಸುಮಾರು 200 ಶಿಕ್ಷಕರನ್ನು ಆಯ್ಕೆ ಮಾಡಲಾಯಿತು. ಪ್ರತಿವಾರ ಐದು ಅಥವಾ ಆರು ಶಾಲೆಗಳಿಗೆ ಭೇಟಿ ನೀಡಲು ಮತ್ತು ಬೋಧನೆ ಮತ್ತು ಕಲಿಕೆಯನ್ನು ಅವಲೋಕಿಸಲು ಮತ್ತು ಅಗತ್ಯವಿರುವೆಡೆ ಶಿಕ್ಷಕರಿಗೆ ನೆರವು ನೀಡಲು ಮಾರ್ಗದರ್ಶಿ ಶಿಕ್ಷಕರನ್ನು ನಿಯೋಜಿಸಲಾಯಿತು.

ಇದಲ್ಲದೆ, ಶಾಲೆಯಲ್ಲಿಯೇ ಆಂತರಿಕವಾಗಿ ಶಿಕ್ಷಕರನ್ನು ಬೆಂಬಲಿಸಲು ಸರ್ಕಾರವು ಶಿಕ್ಷಕ ಅಭಿವೃದ್ಧಿ ಸಂಯೋಜಕರ (TDC) ಮತ್ತೊಂದು ಯೋಜನೆಯನ್ನು ಪರಿಚಯಿಸಿತು. ಪ್ರತಿಶಾಲೆಯು ಶಿಕ್ಷಕರೊಂದಿಗೆ ಕೇಳಿ ತಿಳಿದುಕೊಳ್ಳುವ ಆಧಾರದ ಮೇಲೆ, ಅವರ ಕೌಶಲಗಳನ್ನು ಹೆಚ್ಚಿಸಲು ಸಹಾಯಮಾಡುತ್ತದೆ. ಶಿಕ್ಷಕರಿಗೆ ಮತ್ತು ಶಾಲಾ ಆಡಳಿತಕ್ಕೆ ಹಿಮ್ಮಾಹಿತಿ ನೀಡುತ್ತದೆ. ಅವರ ಶಾಲೆಗಳ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಸಹಾಯ ಮನವಿಕಸನ (brain storming) ಚರ್ಚೆಗಳ ಮೂಲಕ ಪರಿಹಾರಗಳೊಂದಿಗೆ ಬರಲು, ಹೊಸ ವಿಚಾರಗಳನ್ನು ಸೃಷ್ಟಿಸಲು, ಈ ಚರ್ಚೆಯ ತರಗತಿಗಳನ್ನು ಬಳಸಿಕೊಂಡು ಅವನ/ ಅವಳ ಸ್ವಂತ ಕೌಶಲಗಳನ್ನು ಸುಧಾರಿಸಲು ಮಾರ್ಗದರ್ಶಕ ಶಿಕ್ಷಕರೊಂದಿಗೆ ಸಂಪರ್ಕದಲ್ಲಿರುತ್ತಾರೆ.

ದೆಹಲಿ ಸರ್ಕಾರವು ಪರಿಚಯಿಸಿದ ಇತ್ತೀಚಿನ ಉಪಕ್ರಮವೆಂದರೆ 'ಮಿಷನ್ ಬುನಿಯಾದ್'. ಈ ಯೋಜನೆಯು 2018ರ ಮೇ 11 ರಂದು ಪ್ರಾರಂಭವಾಗಿ 30ನೇ ಜೂನ್ 2018 ರಂದು ಕೊನೆಗೊಂಡಿತು. ಇದು ಮೂಲತಃ 'ಓದುವ ಅಭಿಯಾನ' ಎಂದು ಕರೆಯಲಾಗುವ ಈ ಹಿಂದೆ ಪ್ರಾರಂಭಿಸಲಾಗಿದ್ದ ಯೋಜನೆಯ ವಿಸ್ತರಣೆಯಾಗಿದೆ. ಇದನ್ನು 6 ರಿಂದ 8ನೇ ತರಗತಿಯ ವಿದ್ಯಾರ್ಥಿಗಳ ಓದುವ ಕೌಶಲಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಮಾಪನ ಮಾಡಲು ಮತ್ತು ಪರಿಹರಿಸಲು ಪ್ರಾರಂಭಿಸಲಾಗಿತ್ತು. ಈ ಅಭಿಯಾನಕ್ಕೆ ಮೂಲಭೂತ ಪರಿಕಲ್ಪನೆಗಳ ಮೇಲೆ ಕೇಂದ್ರೀಕರಿಸಿದ ಬೋಧನೆ-ಕಲಿಕೆ ಸಾಮಗ್ರಿಗಳನ್ನು (TLM) ಅಭಿವೃದ್ಧಿಪಡಿಸಿ, ನಿರ್ವಹಿಸಲಾಗಿತ್ತು. ಓದುವ ಅಭಿಯಾನದ ಉಪಕ್ರಮವು ಉತ್ತಮ ಫಲಿತಾಂಶಗಳನ್ನು ನೀಡಿತು ಮತ್ತು ಸುಮಾರು 75,000 ವಿದ್ಯಾರ್ಥಿಗಳು ನಿರರ್ಗಳವಾಗಿ ಓದಲು ಕಲಿತರು. ಅಲ್ಲದೆ 90,000 ವಿದ್ಯಾರ್ಥಿಗಳು ಮೂಲಭೂತ ಗಣಿತದ ಸಮಸ್ಯೆಗಳನ್ನು ಬಿಡಿಸಲು ಕಲಿತರು ಎಂದು ಸರ್ಕಾರವು ಹೇಳಿದೆ. ಆದಾಗ್ಯೂ, ಸುಮಾರು 2.5 ಲಕ್ಷ ವಿದ್ಯಾರ್ಥಿಗಳು ಇನ್ನೂ ಅಪೇಕ್ಷಿತ ಮಟ್ಟಕ್ಕಿಂತ ಕೆಳಗಿದ್ದಾರೆ ಎಂದು ವರದಿಯಾಗಿದೆ. ಆದ್ದರಿಂದ, ಬರವಣಿಗೆ ಮತ್ತು ಮೂಲ ಸಂಖ್ಯಾ ಸಾಮರ್ಥ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಹರಿಸಲು ಮಿಷನ್ ಬುನಿಯಾದ್ ಅನ್ನು ಪ್ರಾರಂಭಿಸಲಾಯಿತು.

ದೆಹಲಿ ಸರ್ಕಾರವು ಪ್ರಾರಂಭಿಸಿದ ಇತರ ಉಪಕ್ರಮಗಳಾದ 'ಪ್ರಗತಿ' ಸರಣಿಗಳಂತಹವನ್ನು ಉಲ್ಲೇಖಿಸಲೇಬೇಕು. ಇದು 'ಹೊರೆಯಿಲ್ಲದೆ ಕಲಿಯುವ' ತತ್ತ್ವವನ್ನು ಆಧರಿಸಿದೆ. 6 ರಿಂದ 8ನೇ ತರಗತಿಗಳಿಗೆ ಇಂಗ್ಲಿಷ್, ಹಿಂದಿ, ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನದ ಮೂಲಭೂತ ಕಲಿಕಾ ಸಾಮಗ್ರಿಗಳ ಸೆಟ್ ಅನ್ನು ಅಭಿವೃದ್ಧಿಪಡಿಸಲಾಯಿತು. ಸರ್ಕಾರಿ ಶಾಲೆಗಳ ಪ್ರತಿಯೊಬ್ಬ ವಿದ್ಯಾರ್ಥಿಯ ಕಲಿಕಾ ಅನುಭವವನ್ನು ಹೆಚ್ಚಿಸಲು ಈ ಕಲಿಕಾ ಸಾಮಗ್ರಿಗಳನ್ನು ಮುದ್ರಿಸಿ ಅವರಿಗೆ ಉಚಿತವಾಗಿ ವಿತರಿಸಲಾಯಿತು. 6ನೇ ತರಗತಿಗೆ ಸರ್ಕಾರಿ ಶಾಲೆಗಳಲ್ಲಿ ಬೇಸಿಗೆ ಶಿಬಿರಗಳನ್ನು ಆಯೋಜಿಸುವುದು ದೆಹಲಿ ಸರ್ಕಾರದ ಮತ್ತೊಂದು ಗಮನಾರ್ಹ ಉಪಕ್ರಮವಾಗಿದೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ 2005 ಸೂಚನೆಯಂತೆ ಚಟುವಟಿಕೆ ಆಧಾರಿತ ಕಲಿಕೆಯ ಅನುಭವಗಳ ಮೇಲೆ ಹೆಚ್ಚಿನ ಒತ್ತು ನೀಡಿ ಶಾಲಾ ಪರಿಸರಕ್ಕೆ ವಿದ್ಯಾರ್ಥಿಗಳನ್ನು ಪರಿಚಯಿಸುವುದು ಈ ಅಭಿಯಾನದ ಹಿಂದಿನ ಆಲೋಚನೆಯಾಗಿದೆ. ಬೇಸಿಗೆ ಶಿಬಿರದಲ್ಲಿ ಕಲೆ ಮತ್ತು ಕರಕುಶಲತೆ, ಓದುವಿಕೆ ಮತ್ತು ಬರವಣಿಗೆ, ಆಟಗಳು, ನೃತ್ಯ, ಸಂಗೀತದಂತಹ ವಿವಿಧ ಚಟುವಟಿಕೆಗಳನ್ನು ನಡೆಸಲಾಗುತ್ತದೆ. ವಿದ್ಯಾರ್ಥಿಗಳನ್ನು ತೊಡಗಿಸಿಕೊಂಡು ಅವರಿಗೆ ಕಲಿಯಲು ಮತ್ತು ಕೌಶಲಗಳನ್ನು ಪಡೆಯಲು ಸಹಾಯ ಮಾಡುವುದು ಇವುಗಳ ಉದ್ದೇಶವಾಗಿದೆ.

ದೆಹಲಿ ಸರ್ಕಾರದ ಮತ್ತೊಂದು ಉಪಕ್ರಮವೆಂದರೆ ಕಲಾ ಉತ್ಸವ್. ವಿದ್ಯಾರ್ಥಿಗಳಿಗೆ ಇತರ ರಾಜ್ಯಗಳ ಸೌಂದರ್ಯಶಾಸ್ತ್ರ, ಪರಂಪರೆ, ಪದ್ಧತಿಗಳು, ಸಂಸ್ಕೃತಿ ಮತ್ತು ಸಂಪ್ರದಾಯಗಳ ಬಗ್ಗೆ ಅರಿವು ಮೂಡಿಸುವ ಮತ್ತು ಪ್ರದರ್ಶಿಸುವ ಉದ್ದೇಶದಿಂದ ಇದನ್ನು ಪ್ರಾರಂಭಿಸಲಾಯಿತು. ಈ ಉಪಕ್ರಮವು ಶಿಕ್ಷಣದಲ್ಲಿ ಕಲೆಯನ್ನು ಮತ್ತು ಸಂಗೀತ, ರಂಗಭೂಮಿ, ದೃಶ್ಯ ಕಲೆಗಳು ಮತ್ತು ಕರಕುಶಲತೆಯ ಮೂಲಕ ವಿವಿಧ ಹಂತಗಳಲ್ಲಿ ವಿದ್ಯಾರ್ಥಿಗಳ ಕಲಾತ್ಮಕ ಪ್ರತಿಭೆಯನ್ನು ಉತ್ತೇಜಿಸುತ್ತದೆ.

ದೆಹಲಿ ಸರ್ಕಾರದ ಮತ್ತೊಂದು ಮಹತ್ತ್ವದ ಹೆಜ್ಜೆ ಎಂದರೆ, ಪೋಷಕ ಶಿಕ್ಷಕರ ಮಹಾಸಭೆ (ಮೆಗಾ ಪೇರೆಂಟ್ ಟೀಚರ್ ಮೀಟಿಂಗ್ಸ್ (MPTMms) ಸ್ಥಾಪನೆ ಮಾಡಿದ್ದು. ಇದು ಶಿಕ್ಷಕರು ಮತ್ತು ಪೋಷಕರಿಗೆ ಪ್ರತಿ ತಿಂಗಳು ಭೇಟಿಯಾಗುವ ಅವಕಾಶವನ್ನು ನೀಡಿತು. ಆ ಮೂಲಕ ಅವರ ನಡುವೆ ಇದ್ದ ಸಂವಹನದ ಕೊರತೆಯನ್ನು ನಿವಾರಿಸುವುದು ಮತ್ತು ವಿದ್ಯಾರ್ಥಿಗಳ ಕಲಿಕೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಪೋಷಕರಿಗೆ ಸರಿಯಾದ ಹಿಮ್ಮಾಹಿತಿಯನ್ನು ನೀಡುವುದು ಇದರ ಉದ್ದೇಶವಾಗಿತ್ತು. ಇದು ಶಿಕ್ಷಕ ಮತ್ತು ಪೋಷಕರ ನಡುವೆ ಸಾಮರಸ್ಯ ಮತ್ತು ಸೌಹಾರ್ದಯುತ ಸಂಬಂಧವನ್ನು ಸಹ ಬೆಳೆಸುತ್ತದೆ.

**ಕಾರ್ಯ ಯೋಜನೆಗಳ SWOC ವಿಶ್ಲೇಷಣೆ**

**ಸಾಮರ್ಥ್ಯ**

- ಸರ್ಕಾರದಿಂದ ಆರಂಭಗೊಂಡ ಯೋಜನೆಗಳು ಸರ್ಕಾರಿ ಶಾಲೆಗಳ ವಿದ್ಯಾರ್ಥಿಗಳ ಕಲಿಕಾ ವಾತಾವರಣವನ್ನು ಅಭಿವೃದ್ಧಿಪಡಿಸಲು ಸರ್ಕಾರಕ್ಕೆ ಇರುವ ಸ್ಪಷ್ಟ ಉದ್ದೇಶಗಳು ಮತ್ತು ಇಚ್ಛೆಯನ್ನು ತೋರಿಸುತ್ತವೆ.
- ದೆಹಲಿ ಸರ್ಕಾರವು ತನ್ನ ಒಟ್ಟು ಬಜೆಟ್ನ 25 ಪ್ರತಿಶತವನ್ನು ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಶೈಕ್ಷಣಿಕ ವಾತಾವರಣವನ್ನು ಹೆಚ್ಚಿಸಲು ಮತ್ತು ಸುಧಾರಿಸಲು ಖರ್ಚುಮಾಡಿದೆ.
- ಪೂರಕ ಮತ್ತು ಪರಿಹಾರ ಬೋಧನಾ ಕಲಿಕಾ ಸಾಮಗ್ರಿಗಳನ್ನು ಒದಗಿಸಲಾಗಿದೆ.
- ನಿಯಮಿತವಾಗಿ ಶಿಕ್ಷಕರ ತರಬೇತಿಗಳನ್ನು ಆಯೋಜಿಸುವ ಮೂಲಕ ಶಿಕ್ಷಕರಿಗೆ ಶೈಕ್ಷಣಿಕ ಒಳಹರಿವುಗಳನ್ನು ನೀಡಲಾಗಿದೆ.
- ಶಿಕ್ಷಕರ ಅಭಿವೃದ್ಧಿ ಸಂಯೋಜಕರು (TDCs) ಶೈಕ್ಷಣಿಕವಾಗಿ ಮಧ್ಯಸ್ಥಿಕೆ ವಹಿಸುತ್ತಾರೆ ಮತ್ತು ಹಿಮ್ಮಾಹಿತಿಯನ್ನು ನೀಡುತ್ತಾರೆ.
- ವಿದ್ಯಾರ್ಥಿಗಳ ಕಲಿಕೆಯನ್ನು ಹೆಚ್ಚಿಸಲು ಸಮುದಾಯದ ಸಹಭಾಗಿತ್ವ.
- ಇಂತಹ ಕ್ರಮಗಳು ಸಾಕಷ್ಟು ಶ್ರಮವನ್ನು ಬೇಡುತ್ತವೆಯಾದರೂ ಶಿಕ್ಷಕರು ಅವುಗಳನ್ನು ಕಡು ಉತ್ಸಾಹದಿಂದ ಬೆಂಬಲಿಸುತ್ತಾರೆ.

**ದುರ್ಬಲತೆಗಳು**

- ವಿದ್ಯಾರ್ಥಿಗಳ ಭಾಗವಹಿಸುವಿಕೆಯು ನಿರೀಕ್ಷೆಗೆ ತಕ್ಕಂತೆ ಇಲ್ಲ: ಕೇವಲ 25 ಪ್ರತಿಶತದಷ್ಟು ವಿದ್ಯಾರ್ಥಿಗಳು ಬೇಸಿಗೆ ರಜೆಯಲ್ಲಿ ತರಗತಿಗಳಿಗೆ ಹಾಜರಾಗುತ್ತಿದ್ದಾರೆ. ಏಕೆಂದರೆ ಆಗ ಅವರು ತಮ್ಮ ಊರುಗಳಿಗೆ ಹೋಗಲು ಬಯಸುವುದರಿಂದ ಅಂತಹ ತರಗತಿಗಳಿಗೆ ಹಾಜರಾಗಲು ಬಯಸುವುದಿಲ್ಲ.
- ಸರ್ಕಾರಿ ಶಾಲೆಗಳು ಈಗಾಗಲೇ ಶಿಕ್ಷಕರ ಕೊರತೆಯನ್ನು ಎದುರಿಸುತ್ತಿವೆ. ಇದಲ್ಲದೆ, ಸುಮಾರು 200 ಶಿಕ್ಷಕರನ್ನು ಮಾರ್ಗದರ್ಶಿ ಶಿಕ್ಷಕರಾಗಿ ನಿಯೋಜಿಸಲಾಗಿದೆ ಮತ್ತು ಈಗಾಗಲೇ ನೇಮಕಗೊಂಡ ಶಿಕ್ಷಕರ ಪೈಕಿ 1029 ಶಿಕ್ಷಕರು, ಶಿಕ್ಷಕರ ಅಭಿವೃದ್ಧಿ ಸಂಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದು ಶಿಕ್ಷಕರ ಕೊರತೆಯನ್ನು ಮತ್ತಷ್ಟು ಹೆಚ್ಚಿಸುತ್ತದೆ.
- ಮಿಷನ್ ಬುನಿಯಾದ್‌ನಲ್ಲಿ ಹೆಚ್ಚಾಗಿ ಅತಿಥಿ ಶಿಕ್ಷಕರು ತೊಡಗಿಸಿಕೊಂಡಿದ್ದಾರೆ.
- ಪರಿಸ್ಥಿತಿಯನ್ನು ಸುಧಾರಿಸಲು ಅನುವಾಗುವಂತೆ ಹೆಚ್ಚಿನ ಪ್ರಯತ್ನವನ್ನು ಮಾಡುವಂತೆ ಅವರನ್ನು ಪ್ರೇರೇಪಿಸಲು ಶಿಕ್ಷಕರಿಗೆ ಹೆಚ್ಚುವರಿಯಾಗಿ ಯಾವುದೇ ಮೆಚ್ಚುಗೆ ಅಥವಾ ಪ್ರೋತ್ಸಾಹ ನೀಡುತ್ತಿಲ್ಲ.
- ನಿಜವಾದ ಕಲಿಕೆಗೆ ಒತ್ತು ನೀಡುವ ಬದಲು ಸರ್ಕಾರವು, ವಿದ್ಯಾರ್ಥಿಗಳ ಹಾಜರಾತಿ, ಶಿಕ್ಷಕರ ದಿನಚರಿ, ಉಪಹಾರ ವಿತರಣೆ ಮುಂತಾದ ದತ್ತಾಂಶವನ್ನು ಕೇಳುತ್ತದೆ.

**ಅವಕಾಶಗಳು**

- ಸರ್ಕಾರಕ್ಕೆ, ಶಾಲಾ ಆಡಳಿತಗಳಿಗೆ ಹಾಗೂ ವಿದ್ಯಾರ್ಥಿಗಳಿಗೆ ಕಲಿಕೆಯ ವಾತಾವರಣವನ್ನು ಉತ್ತಮಗೊಳಿಸುವ ಅವಕಾಶವಿದೆ. ಇದರಿಂದ ಓದುವುದು, ಬರೆಯುವುದು ಮತ್ತು ಮೂಲಭೂತ ಅಂಕಗಣಿತದ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ವಿಶೇಷ ಗಮನಹರಿಸುತ್ತಾ ವಿದ್ಯಾರ್ಥಿಗಳು ಉತ್ತಮ ರೀತಿಯಲ್ಲಿ ಕಲಿಯಬಹುದಾಗಿದೆ.
- ಇದಲ್ಲದೆ, ಈ ಉಪಕ್ರಮಗಳು ಸರ್ಕಾರಿ ಶಾಲೆಗಳಲ್ಲಿ ಶೈಕ್ಷಣಿಕ ಪರಿಸ್ಥಿತಿಯನ್ನು ಸುಧಾರಿಸಲು ಅನುಸರಣಾ ಕಾರ್ಯಕ್ರಮಗಳನ್ನು ಜಾರಿಗೆ ತರಲು ಅವಕಾಶಕಲ್ಪಿಸುತ್ತವೆ.
- ಇಂದಿನ ಕಾಲದ ಅವಶ್ಯಕತೆಗಳಿಗೆ ಅನುಗುಣವಾಗಿ ಸೇವಾಂತರ್ಗತ ತರಬೇತಿಗೆ ಹಾಜರಾಗುವ ಮೂಲಕ ಶಿಕ್ಷಕರು ತಮ್ಮ ಪ್ರಸ್ತುತಜ್ಞಾನ ಮತ್ತು ಕೌಶಲಗಳಲ್ಲಿ ಸುಧಾರಣೆ ಕಾಣುವ ಅವಕಾಶವನ್ನು ಪಡೆಯುತ್ತಾರೆ.
- ಅಂತೆಯೇ, ವಿದ್ಯಾರ್ಥಿಗಳು ಶೈಕ್ಷಣಿಕ ವಿಷಯಗಳಿಗೆ ಸಂಬಂಧಿಸಿದಂತೆ, ವಿಶೇಷವಾಗಿ ಓದುವುದು, ಬರೆಯುವುದು ಮತ್ತು ಮೂಲ ಅಂಕಗಣಿತದಂಥ ಸಮಸ್ಯೆಗಳಲ್ಲಿನ ದುರ್ಬಲತೆಯನ್ನು ನಿವಾರಿಸಿಕೊಳ್ಳುವ ಅವಕಾಶವನ್ನು ಪಡೆಯುತ್ತಾರೆ..

**ಸವಾಲುಗಳು**

- ವಿದ್ಯಾರ್ಥಿಗಳ ಹಾಜರಾತಿಯು ಉತ್ತಮವಾಗಿರುವಂತೆ ನೋಡಿಕೊಳ್ಳುವುದು ಆಡಳಿತ ಮಂಡಳಿ ಮತ್ತು ಶಿಕ್ಷಕರಿಗೆ ಅತ್ಯಂತ ಸವಾಲಿನ ಕೆಲಸವಾಗಿದೆ.
- ವಿವಿಧ ಕಾರ್ಯಕ್ರಮಗಳನ್ನು ಒಂದರ ಹಿಂದೆ ಒಂದರಂತೆ ಮಾಡುವುದು ಮತ್ತು, ನೀಡಲಾದ ಮಾರ್ಗಸೂಚಿಗಳ ಪ್ರಕಾರ ನಿಯಮಿತ ಪಠ್ಯಕ್ರಮವನ್ನೂ ನಿರ್ವಹಿಸುವುದು ಕಷ್ಟ.
- ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಬ್ಬರನ್ನೂ ಸುಡು ಬೇಸಿಗೆಯ ಬಿಸಿಲಿನ ತಾಪದಲ್ಲಿ ಶಾಲೆಗೆ ಬರುವಂತೆ ಪ್ರೇರೇಪಿಸುವುದು ಮತ್ತೊಂದು ಕಷ್ಟಕರವಾದ ಕೆಲಸ.
- ಅಂತಹ ಯೋಜನೆಗಳು ಮತ್ತು ಉಪಕ್ರಮಗಳ ನೈಜ ಮೌಲ್ಯಮಾಪನವು ಒಂದು ದೊಡ್ಡ ಸವಾಲಾಗಿದೆ.

**ಉಪಸಂಹಾರ**

ಹಿಂದಿ ಸರ್ಕಾರಗಳು ಕೇವಲ ಮೂಲ ಸೌಕರ್ಯಗಳನ್ನು ಸುಧಾರಿಸುವ ಉದ್ದೇಶದಿಂದ ವಿವಿಧ ಮುಖ್ಯಸ್ಥರಿಗೆ ಹಿಂದುಮುಂದು ಯೋಚಿಸದೆ ಹಣ ಮಂಜೂರು ಮಾಡಿದೆ. ಇದು, ಪ್ರತಿ ಮಗುವಿನ ಮೇಲಿನ ವೆಚ್ಚವನ್ನು ಹೆಚ್ಚಿಸಿದೆ. ಆದರೆ ಯಾವುದೇ ರೀತಿಯಲ್ಲೂ ಶಾಲೆಗಳ ಕಾರ್ಯಕ್ಷಮತೆಯು ಸುಧಾರಿಸಿಲ್ಲ ಎಂಬುದನ್ನು ಗಮನಿಸಲಾಗಿದೆ. ಇದು ವೆಚ್ಚ ಮತ್ತು ಕಾರ್ಯಕ್ಷಮತೆಯ ನಡುವೆ ಅಸಮಂಜಸತೆಗೆ ಕಾರಣವಾಗಿದೆ. ಈ ಬಾರಿ ದೆಹಲಿ ಸರ್ಕಾರವು ಶಿಕ್ಷಣ ವ್ಯವಸ್ಥೆಯನ್ನು ಆದ್ಯತೆಯನ್ನಾಗಿ ಪರಿಗಣಿಸಿದೆ ಹಾಗೂ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಶೈಕ್ಷಣಿಕ ಸನ್ನಿವೇಶಗಳು ಮತ್ತು ಶೈಕ್ಷಣಿಕ ವಾತಾವರಣವನ್ನು ವರ್ಧಿಸಲು ಮತ್ತು ಸುಧಾರಿಸಲು ತನ್ನ ಬಜೆಟ್ ನ ಸಾಕಷ್ಟು ಹಣವನ್ನು ಖರ್ಚುಮಾಡುತ್ತಿದೆ. ಮೂಲಭೂತ ಸೌಕರ್ಯಗಳನ್ನು ಸುಧಾರಿಸುವ ಜೊತೆಗೆ ಗುಣಮಟ್ಟದ ಶಿಕ್ಷಣವನ್ನು ನೀಡಲು ಸರ್ಕಾರವು ವಿವೇಚನಾಯುಕ್ತ ಕ್ರಮಗಳನ್ನು ತೆಗೆದುಕೊಂಡು, ವಿವಿಧ ಯೋಜನೆಗಳನ್ನು ಪರಿಚಯಿಸಿತು. ಇದು ವಿದ್ಯಾರ್ಥಿಗಳಿಗೆ ಹೆಚ್ಚು ಹೊರೆಯಾಗದಂತೆ ಕಲಿಯಲು, ಮತ್ತು 'ಸಂತೋಷದಾಯಕ ಬೋಧನೆ-ಕಲಿಕೆ' ವಿಧಾನದ ಸಹಾಯದಿಂದ ಅವರ ಕಲಿಕೆಯ ಅಡೆತಡೆಗಳನ್ನು ನಿವಾರಿಸಿಕೊಳ್ಳಲು ಅವಕಾಶಗಳನ್ನು ಒದಗಿಸಿತು. ಆದಾಗ್ಯೂ, ಶಿಕ್ಷಕರಿಗೆ ಮತ್ತು ಆಡಳಿತ ಮಂಡಳಿಗೆ ಒಂದರ ಹಿಂದೆ ಒಂದರಂತೆ ವಿಭಿನ್ನ ಕಾರ್ಯಕ್ರಮಗಳನ್ನು ನಡೆಸಿಕೊಂಡು, ನೀಡಲಾದ ಮಾರ್ಗಸೂಚಿಗಳ ಪ್ರಕಾರ ನಿಯಮಿತ ಪಠ್ಯಕ್ರಮವನ್ನು ನಿರ್ವಹಿಸುವುದು ಸವಾಲಿನ ಸಂಗತಿಯಾಗಿದೆ.

ಹೀಗಿದ್ದರೂ, ಶಿಕ್ಷಕರು ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿರುವುದನ್ನು ನೋಡಲು ಮತ್ತು ಹೆಚ್ಚಿನ ಶ್ರಮವನ್ನು ಬೇಡುವ ಇಂತಹ ಬದಲಾವಣೆಗಳನ್ನು ಬೆಂಬಲಿಸುತ್ತಿರುವುದು ಉತ್ತೇಜನಕಾರಿಯಾಗಿದೆ.

● ಅನುವಾದಕರು: **ನಿವೇದಿತಾ ಬಿ ರುದ್ರೇಶ್** | ಪರಿಶೀಲಕರು: **ನಾಗಮಣಿ ಎಸ್ ಎನ್**

**ಪರಾಮರ್ಶನೆಗಳು**


1 Circular No. DE.23 (612)/ Sch. Br./ 2018/265 dated 05.03.2018 issued by DOE, GNCT of Delhi.

2 Circular No. DE.23 (632)/ Sch. Br./ 2018/443 dated 05.04.2018 issued by DOE, GNCT of Delhi.

3 Circular No. DE.23 (632)/ Sch. Br./ 2018/444 dated 05.04.2018 issued by DOE, GNCT of Delhi.

4 Key Learning Indicators of Performance (2015), The Centre for Learning Excellence, Lancashire County Council, United Kingdom.

5 Look Beyond Basics (2017), Annual Status Education Report, ASER centre, Safdarjung, New Delhi

6 Quality Education for All: Initiatives and Innovations Transforming Delhi Education, Published by Government of NCT, Delhi.

7 Quality in School Education, Quality Council of India, New Delhi.



**ಮೊಹಮದ್ದು ಹೇಲ್:** ಇವರು ಶಿಕ್ಷಕರಾಗಿದ್ದಾರೆ. ಜಾಮಿಯಾ ಮಿಲಿಯಾ ಇಸ್ಲಾಮಿಯಾ ವಿಶ್ವವಿದ್ಯಾಲಯದಿಂದ ಶಿಕ್ಷಣದಲ್ಲಿ ಪಿಎಚ್.ಡಿ ಪದವಿ ಪಡೆದಿದ್ದಾರೆ. ಇವರು, ಹೊರಾಂಗಣ ಶಿಕ್ಷಣ, ಅನುಭವಾಧರಿತ ಕಲಿಕೆ, ಶಿಕ್ಷಕರ ಶಿಕ್ಷಣ ಹೀಗೆ ಬಹುಮುಖ ಆಸಕ್ತಿ ಹೊಂದಿದ್ದಾರೆ. ಇವರು ವೃತ್ತಿನಿರತ ಶಿಕ್ಷಕರಿಗೆ ನಿರಂತರ ವೃತ್ತಿ ಅಭಿವೃದ್ಧಿಗಾಗಿ ಒಂದು ಹೊರಾಂಗಣ ಶಿಕ್ಷಣದ ಮಾಡೆಲ್ ಅಭಿವೃದ್ಧಿಪಡಿಸಿದ್ದಾರೆ. ಇವರ ಸಂಪರ್ಕಕ್ಕೆ: msuhail.edu@gmail.com

**ವಾಸೀಮ್ ಅಹಮದ್ ಖಾನ್:** ಇವರು ದೆಹಲಿಯ ಜಾಮಿಯಾ ಮಿಲಿಯಾ ಇಸ್ಲಾಮಿಯಾ ವಿಶ್ವವಿದ್ಯಾಲಯದಲ್ಲಿ ಶಿಕ್ಷಕ ತರಬೇತಿ ಮತ್ತು ಅನೌಪಚಾರಿಕ ಶಿಕ್ಷಣ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಇವರಿಗೆ 30 ವರ್ಷಕ್ಕೂ ಹೆಚ್ಚಿನ, ಸಮಾಜವಿಜ್ಞಾನ ಶಿಕ್ಷಣದಲ್ಲಿ, ಶಿಕ್ಷಕ ಶಿಕ್ಷಣದಲ್ಲಿ, ಮಾರ್ಗದರ್ಶನ ಹಾಗೂ ಆಪ್ತ ಸಮಾಲೋಚನೆಯಲ್ಲಿ, ಪರಿಸರ ಶಿಕ್ಷಣದಲ್ಲಿ, ಶೈಕ್ಷಣಿಕ ಆಡಳಿತ ಹಾಗೂ ಮೇಲುಸ್ತುವಾರಿಯಲ್ಲಿ, ಅಲ್ಪಸಂಖ್ಯಾತರ ಶಿಕ್ಷಣದಲ್ಲಿ, ಸಮಾಜೋ-ಆರ್ಥಿಕ ಸಮಸ್ಯೆಗಳಲ್ಲಿ ಮತ್ತು ಉನ್ನತ ಶಿಕ್ಷಣ ಕ್ಷೇತ್ರಗಳಲ್ಲಿ ಕೆಲಸ ಮಾಡಿದ ಅನುಭವವಿದೆ. ಇವರಸಂಪರ್ಕಕ್ಕೆ: wak.jmi@gmail.com